# 2016ರ ರಾಷ್ಟ್ರೀಯ ಕರಡು ಶಿಕ್ಷಣ ನೀತಿಯಲ್ಲಿ (ಡಿಎನ್‌ಇಪಿ) ಭಾಷೆ ಮತ್ತು ಸಾಕ್ಷರತೆ

**ಎ ಗಿರಿಧರ್ ರಾವ್ ಮತ್ತು ಶೈಲಾಜಾ ಮೆನನ್**

43 ಪುಟಗಳ 'ರಾಷ್ಟ್ರೀಯ ಕರಡು ಶಿಕ್ಷಣ ನೀತಿಯ ಕುರಿತ ದಸ್ತಾವೇಜಿನ ಕೆಲವು ವಿಷಯಗಳು' (*Some Inputs for Draft National Education Policy* (MHRD, 2016b– ಡಿಎನ್‌ಇಪಿ) ಎಂಬ ಭಾಗದಲ್ಲಿ ಭಾಷೆ ಮತ್ತು ಸಾಕ್ಷರತೆಯ ಕುರಿತು ಹೇಗೆ ಗಮನಹರಿಸಲಾಗಿದೆ ಎಂಬುದನ್ನು ನಾವು ಈ ಲೇಖನದಲ್ಲಿ ಸಂಕ್ಷಿಪ್ತವಾಗಿ ನೋಡೋಣ. 217 ಪುಟಗಳ ರಾಷ್ಟ್ರೀಯ ಶಿಕ್ಷಣ ನೀತಿ 2016 : ಹೊಸ ಶಿಕ್ಷಣ ನೀತಿಯ ವಿಕಸನ ಸಮಿತಿ ವರದಿಯ (ಎಂಎಚ್‌ಆರ್ಡಿ, 2016; ಇನ್ನು ಮುಂದೆ ಸಿಇಎನ್‌ಇಪಿ) ಜೊತೆಜೊತೆಯಾಗಿ ಈ ಡಿಎನ್‌ಇಪಿಯನ್ನು ಓದದಿದ್ದರೆ ಈ ಮೇಲಿನ ಅಂಶವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂಬುದು ನಮ್ಮ ಭಾವನೆ. ಆದ್ದರಿಂದ, ನಮ್ಮ ವಿಶ್ಲೇಷಣೆಯಲ್ಲಿ ನಾವು ಎರಡು ದಾಖಲೆಗಳನ್ನೂ ಪರಿಗಣಿಸಿದ್ದೇವೆ. (ವಿಪರ್ಯಾಸವೆಂದರೆ, ಎಂಹೆಚ್‌ಆರ್ಡಿ ವೆಬ್‌ಸೈಟ್‌ನಲ್ಲಿನ 'ಸೂಕ್ತ ದಾಖಲೆಗಳು' ಪಟ್ಟಿಯಲ್ಲಿ ಸಿಇಎನ್‌ಇಪಿ ಇಲ್ಲ!). ಮೊದಲಿಗೆ ನಾವು ಭಾಷೆಗೆ ಸಂಬಂಧಿಸಿದ ನೀತಿಗಳು ತದನಂತರ ಸಾಕ್ಷರತೆಯ ಬಗ್ಗೆ ನೋಡೋಣ.

## ಡಿಎನ್‌ಇಪಿ-2016ರಲ್ಲಿ ಭಾಷೆ

ಡಿಎನ್‌ಇಪಿ -2016ರಲ್ಲಿ 'ಶಿಕ್ಷಣದಲ್ಲಿ ಭಾಷೆ ಮತ್ತು ಸಂಸ್ಕೃತಿ' (ಪುಟಗಳು 30-31) ಎಂಬ ಕೇವಲ ಒಂದು ವಿಭಾಗದಲ್ಲಿ ಮಾತ್ರ ಭಾಷೆಯ ಬಗ್ಗೆ ನೇರವಾಗಿ ಪ್ರಸ್ತಾಪಿಸಲಾಗಿದೆ. ಅಲ್ಲಿ ತ್ರಿಭಾಷಾ ಸೂತ್ರ (Three Language Formula-ಟಿಎಲ್‌ಎಫ್), ಜನರಲ್ಲಿ ಇಂಗ್ಲಿಷ್ ಬಗ್ಗೆ ಒಲವು ಮತ್ತು ಮಾತೃಭಾಷೆಯಲ್ಲಿ (ಅಥವಾ ಮೊದಲ ಭಾಷೆ) ಬೋಧನೆ - ಇಂತಹ ಮೂರು ಭಾಷಾ ಸಂಬಂಧಿ ವಿಷಯಗಳ ಬಗ್ಗೆ ಚಿಕ್ಕದಾಗಿ ಹೇಳಲಾಗಿದೆ. ಹಾಗೆಯೇ, ' ... ಹಲವು ರಾಜ್ಯಗಳಲ್ಲಿ ತ್ರಿಭಾಷಾ ಸೂತ್ರದ ಅನುಷ್ಠಾನವು ವಿಚಲನಗೊಂಡಿದೆ ' (ಪು 30) ಎಂದು ದೇಶದಲ್ಲಿ ತ್ರಿಭಾಷಾ ಸೂತ್ರವನ್ನು ಸಮರೂಪಿಯಾಗಿ ಅನುಸರಿಸಲಾಗಿಲ್ಲ ಎಂಬುದನ್ನು ಗುರುತಿಸಲಾಗಿದೆ. ಈ ಪರಿಸ್ಥಿತಿಯ ಬಗ್ಗೆ ಸಿಇಎನ್‌ಇಪಿ ಹೆಚ್ಚು ಸ್ಪಷ್ಟವಾಗಿದೆ : 6.13.11 ಎಲ್ಲಾ ರಾಜ್ಯಗಳು ಮಾಧ್ಯಮಿಕ ಹಂತದವರೆಗೆ ಮೂರು ಭಾಷೆಗಳಲ್ಲಿ ಶಿಕ್ಷಣವನ್ನು ಒದಗಿಸುತ್ತಿಲ್ಲ; ವಾಸ್ತವವಾಗಿ, ಹಲವು ರಾಜ್ಯಗಳಲ್ಲಿ ಭಿನ್ನತೆಗಳಿವೆ. ಹಾಗೆಯೇ ರಾಜ್ಯಗಳೊಳಗಿನ ಸ್ಥಳೀಯ ಭಿನ್ನತೆಗಳು ಎಂತಹವೆಂದರೆ ತ್ರಿಭಾಷಾ ಸೂತ್ರವನ್ನು ರಾಷ್ಟ್ರೀಯ ನೀತಿಯಾಗಿ ಅನುಸರಿಸಿರುವುದಕ್ಕಿಂತ ಅದರ ಉಲ್ಲಂಘನೆ ಹೆಚ್ಚಾಗಿದೆ ಎಂದೇ ಹೇಳಬಹುದು. ಸಂಭಾವ್ಯ ರಾಜಕೀಯ ಕಾರಣಗಳಿಗಾಗಿ ಕೆಲವು ರಾಜ್ಯಗಳಲ್ಲಿ ಕೇವಲ ಎರಡು ಭಾಷೆಗಳನ್ನು ಅಂದರೆ ರಾಜ್ಯ ಭಾಷೆ ಮತ್ತು ಇಂಗ್ಲಿಷ್ ಭಾಷೆಯನ್ನು ಕಲಿಸಲಾಗುತ್ತಿದೆ. ಕೆಲವು ಹಿಂದಿ ಮಾತನಾಡುವ ರಾಜ್ಯಗಳಲ್ಲಿ ಯಾವುದೇ ಹತ್ತು ಆಧುನಿಕ ಭಾರತೀಯ ಭಾಷೆಯ ಬದಲಿಗೆ ಸಂಸ್ಕೃತದ ಕಲಿಕೆಯೇ ತ್ರಿಭಾಷಾ ಸೂತ್ರವೆಂಬಂತೆ ಬಹುಬಾರಿ ವ್ಯಾಖ್ಯಾನಿಸಲಾಗಿದೆ. ತ್ರಿಭಾಷಾ ಸೂತ್ರದ ವಿಚಾರಕ್ಕೆ ವಿರುದ್ಧವಾಗಿ ಹಿಂದಿ ಮಾತನಾಡುವ ರಾಜ್ಯಗಳ ಹೆಚ್ಚಿನ ಶಾಲೆಗಳಲ್ಲಿ ಯಾವುದೇ ದಕ್ಷಿಣ ಭಾರತದ ಭಾಷೆಯನ್ನು ಕಲಿಸುತ್ತಿಲ್ಲ. ಕೆಲವು ಶಾಲಾ ಶಿಕ್ಷಣ ಮಂಡಳಿಗಳು ಸೆಕೆಂಡರಿ ಶಾಲಾ ಪರೀಕ್ಷೆಯಲ್ಲಿ ಹಿಂದಿ ಅಥವಾ ಯಾವುದೇ ಪ್ರಾದೇಶಿಕ ಭಾಷೆಯನ್ನು ಕಲಿಯದೆ ಕೇವಲ ಇಂಗ್ಲಿಷ್ ಮತ್ತು ಒಂದು ವಿದೇಶಿ ಭಾಷೆಯೊಂದಿಗೆ ವಿದ್ಯಾರ್ಥಿಗಳು ಉತ್ತೀರ್ಣರಾಗಲು ಅನುವು ನೀಡುತ್ತಿವೆ.

ತ್ರಿಭಾಷಾ ಸೂತ್ರಕ್ಕೆ ಸಂಬಂಧಿಸಿದಂತೆ ಡಿಎನ್ಇಪಿಯ ಶಿಫಾರಸುಗಳು ಹೀಗಿವೆ: ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಭಾಷಾ ತಿಳಿವಳಿಕೆಯು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹಂತದಲ್ಲಿ ಮುಂದುವರೆಯಲು ಪ್ರಮುಖ ಪಾತ್ರ ವಹಿಸುತ್ತದೆ ಮತ್ತು ಜಾಗತಿಕ ತಿಳಿವಳಿಕೆಗೆ ಅವಕಾಶವನ್ನು ಒದಗಿಸುತ್ತದೆ. ಆದ್ದರಿಂದ, ಇಂಗ್ಲಿಷನ್ನು ಓದಲು ಮತ್ತು ಬರೆಯಲು ಮಕ್ಕಳನ್ನು ಪರಿಣಿತರನ್ನಾಗಿ ಮಾಡುವುದು ಮುಖ್ಯ. ಹೀಗಾಗಿ, ಪ್ರಾಥಮಿಕ ಹಂತದವರೆಗೆ ಕಲಿಕಾ ಮಾಧ್ಯಮವು ಮಾತೃಭಾಷೆ ಅಥವಾ ಸ್ಥಳೀಯ ಅಥವಾ ಪ್ರಾದೇಶಿಕ ಭಾಷೆಯಾಗಿದ್ದರೆ, ಇಂಗ್ಲಿಷ್ ಭಾಷೆಯು ಎರಡನೆಯ ಭಾಷೆಯಾಗಿರುತ್ತದೆ ಮತ್ತು ಮೂರನೇ ಭಾಷೆಯ ಆಯ್ಕೆಯು (ಹಿರಿಯ ಪ್ರಾಥಮಿಕ ಮತ್ತು ಸೆಕೆಂಡರಿ ಹಂತಗಳಲ್ಲಿ) ಸಂವಿಧಾನದ ನಿಬಂಧನೆಗಳಿಗೆ ಅನುಗುಣವಾಗಿ (ಪು. 31) ಪ್ರತ್ಯೇಕ ರಾಜ್ಯಗಳು ಮತ್ತು ಸ್ಥಳೀಯ ಪ್ರಾಧಿಕಾರಿಗಳ ನಿಯಂತ್ರಣದಲ್ಲಿರುತ್ತದೆ.

ಕಲಿಕೆಯ ಮೂರನೇ ಭಾಷೆಯನ್ನು ಆಯ್ಕೆ ಮಾಡುವ ಸ್ವಾಯತ್ತತೆಯು 'ಆಯಾ ರಾಜ್ಯಗಳು ಮತ್ತು ಸ್ಥಳೀಯ ಪ್ರಾಧಿಕಾರ'ಗಳಿಗಿರುವುದು ಸಕಾರಾತ್ಮಕವಾಗಿದೆ. ಆದರೆ, ಇಂದು ಮೂಲನಿವಾಸಿಗರು ಮತ್ತು ಭಾಷಾ ಅಲ್ಪಸಂಖ್ಯಾತರ (of Indigenous Peoples and Linguistic Minorities -IPLM) ಮಕ್ಕಳಿಗೆ ಶಾಲೆಯ ಮೊದಲ ಭಾಷೆಯು ಸಮಸ್ಯೆಯಾಗಿದೆ. ಹೀಗಾಗಿ ಮಾತೃಭಾಷೆಯ ಕಲಿಕೆಯ ಬಗ್ಗೆ ದಸ್ತಾವೇಜು ಏನು ಹೇಳುತ್ತದೆ ಎಂಬುದರ ಬಗ್ಗೆ ನಾವು ಹೆಚ್ಚು ಗಮನ ಹರಿಸುವುದು ಅಗತ್ಯ.

ಮಾತೃಭಾಷಾ ಮಾಧ್ಯಮ ಶಿಕ್ಷಣವನ್ನು ಡಿಎನ್ಇಪಿ ಅನುಮೋದಿಸುತ್ತದೆಂಬುದನ್ನು ನಾವು ಕಾಣುತ್ತೇವೆ. 'ತಮ್ಮ ಮಾತೃಭಾಷೆಯ ಮೂಲಕ ಕಲಿಸಿದಾಗ ವಿದ್ಯಾರ್ಥಿಗಳು ಹೆಚ್ಚು ಚೆನ್ನಾಗಿ ಕಲಿಯುತ್ತಾರೆ' (ಪುಟ 40) ಎಂದು ಡಿಎನ್ಇಪಿ ಒಪ್ಪುತ್ತದೆ. ಆದರೆ ಮುಂದಿನ ವಾಕ್ಯದಲ್ಲಿ, 'ಇನ್ನೊಂದೆಡೆ, ಇಂಗ್ಲಿಷ್ ಭಾಷೆಯ ಕಲಿಕೆಗೆ ಮತ್ತು ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಬೇಡಿಕೆ ಹೆಚ್ಚುತ್ತಿದೆ' ಎಂದು ಹೇಳುತ್ತಾ ಅದನ್ನು ತಿಳಿಗೊಳಿಸಲಾಗಿದೆ. 'ಇನ್ನೊಂದೆಡೆ' ಎಂಬ ಪದವನ್ನು ಬಳಸಿರುವುದು ಮಾತೃಭಾಷಾ ಶಿಕ್ಷಣ ಮತ್ತು ಇಂಗ್ಲಿಷ್ ಭಾಷಾ ಕಲಿಕೆ ಎರಡೂ ಪರಸ್ಪರ ವಿರೋಧಾತ್ಮಕ ಎಂಬುದಾಗಿ ಸೂಚಿಸುತ್ತದೆ. ವಿಶ್ವಾದ್ಯಂತ ಸಫಲವಾದ ದ್ವಿಭಾಷಾ ಶಿಕ್ಷಣ ವ್ಯವಸ್ಥೆಗಳು ಇದು ವಿರೋಧಾತ್ಮಕವಲ್ಲ ಎಂದು ತೋರಿಸುತ್ತವೆ: ಉನ್ನತ ಮಟ್ಟದವರೆಗೆ ಮಕ್ಕಳು ತಮ್ಮ ಮಾತೃಭಾಷೆ ಮತ್ತು 'ಇತರ ಭಾಷೆ' ಎರಡನ್ನೂ ಕಲಿಯಬಹುದು ಮತ್ತು ಕಲಿಯುತ್ತಾರೆ.

**ಮಾತೃಭಾಷೆಯ ಶಿಕ್ಷಣವು ಅತ್ಯುತ್ತಮವೆಂದು ಡಿಎನ್ಇಪಿ ಸಿಇಎನ್‌ಪಿಯನ್ನು ಅನುಮೋದಿಸುತ್ತದೆ:**

6.13.18, 1968ರ ಶಿಕ್ಷಣದ ರಾಷ್ಟ್ರೀಯ ನೀತಿಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯವನ್ನು ಸಮಿತಿಯು ಒಪ್ಪುತ್ತದೆ: 'ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಭಾರತೀಯ ಭಾಷೆಗಳು ಮತ್ತು ಸಾಹಿತ್ಯದ ಸಮೃದ್ಧ ಬೆಳವಣಿಗೆಯು ಅತ್ಯಗತ್ಯ.ಇದನ್ನು ಮಾಡದಿದ್ದಲ್ಲಿ, ಜನರ ಸೃಜನಶೀಲ ಸಾಮರ್ಥ್ಯಗಳು ಹೊರಹೊಮ್ಮುವುದಿಲ್ಲ, ಶಿಕ್ಷಣದ ಗುಣಮಟ್ಟವು ಸುಧಾರಿಸುವುದಿಲ್ಲ, ಜನರಲ್ಲಿ ತಿಳಿವಳಿಕೆ ಉಂಟಾಗುವುದಿಲ್ಲ. ಇಷ್ಟೇ ಅಲ್ಲ, ಬುದ್ಧಿಜೀವಿಗಳು ಮತ್ತು ಜನಸಾಮಾನ್ಯರ ನಡುವಿನ ಅಂತರವು ಹೆಚ್ಚೇನೂ ಆಗದಿದ್ದರೂ ಅಂತರವಂತೂ ಉಳಿದು ಬಿಡುತ್ತದೆ' (ಪು. 98).

ಇವು ಒಳ್ಳೆಯ ಮಾತುಗಳೇ ಸರಿ. ಆದರೆ ನೀತಿಯ ರೂಪದಲ್ಲಿ ಬದ್ಧತೆಯು ಪರಿಣಮಿಸಿಲ್ಲವೆಂಬುದು ವಾಸ್ತವ ವಿಷಯ.

ಭಾಷೆಗೆ ಸಂಬಂಧಿಸಿದಂತೆ ಡಿಎನ್ಇಪಿಯ ಉಪಕ್ರಮಗಳು ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಅನ್ವಯಿಸುತ್ತವೆ, ರಾಜ್ಯಗಳು ಬಯಸಿದರೆ, ಶಾಲೆಗಳಲ್ಲಿ 5ನೇ ತರಗತಿಯವರೆಗೆ ಮಾತೃಭಾಷೆಯನ್ನು ಸ್ಥಳೀಯ ಅಥವಾ ಪ್ರಾದೇಶಿಕ ಭಾಷೆಯನ್ನು ಶಿಕ್ಷಣದ ಮಾಧ್ಯಮವಾಗಿ ಒದಗಿಸಬಹುದು (ಪು. 31).ಇಲ್ಲಿ ಮಾತೃಭಾಷೆಯಲ್ಲಿ ಕಲಿಕಾ ಫಲಿತಾಂಶಗಳು ಅತ್ಯುತ್ತಮವೆಂದು ಘೋಷಿಸುತ್ತಾ, ದಸ್ತಾವೇಜು ಈ ಮುಂದಿನ ನಿಬಂಧನೆಯನ್ನು ಸೇರಿಸುತ್ತದೆ: 'ಅವರು ಬಯಸಿದರೆ', 'ಮಾತೃಭಾಷೆ, ಸ್ಥಳೀಯ ಅಥವಾ ಪ್ರಾದೇಶಿಕ ಭಾಷಾ' 'ಶಿಕ್ಷಣವನ್ನು ಒದಗಿಸಬಹುದು' ಎನ್ನುತ್ತದೆ. ಇವೆಲ್ಲವೂ ಐಪಿಎಲ್ಎಂ ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣವನ್ನು ನಿರಾಕರಿಸುವುದನ್ನು ನ್ಯಾಯಸಮ್ಮತಗೊಳಿಸುವ ವಿರೋಧಾಭಾಸಗಳು ಮತ್ತು ನೆಪಗಳಷ್ಟೇ.ಈ ಮಕ್ಕಳ ಶಿಕ್ಷಣದ ವಿಷಯದಲ್ಲಿ ಡಿಎನ್ಇಪಿ ಮತ್ತು ಸಿಇಎನ್ಇಪಿ ಅತ್ಯಂತ ಕಾಳಜಿಹೀನವಾಗಿದೆಯೆಂಬುದು ಕೂಡ ಗಮನಿಸಬೇಕಾದ ವಿಷಯವೇ. ಇಲ್ಲಿಯೇ ನಾವು ಮಾತೃಭಾಷೆಯ ಶಿಕ್ಷಣವೆಂದರೆ ವಾಸ್ತವಿಕವಾಗಿ ಪೂರ್ವ ಪ್ರಾಥಮಿಕ ಶಿಕ್ಷಣ ಎಂಬರ್ಥದಲ್ಲಿ ಕಾಣುತ್ತೇವೆ! ಡಿಎನ್ಇಪಿಯ 40 ಪುಟಗಳ ಈ ದಸ್ತಾವೇಜಿನ ಮಧ್ಯಭಾಗದಲ್ಲಿ ಭಾಷೆಯ ಕುರಿತ ಮೊದಲ ಪ್ರಸ್ತಾಪವು ಕಂಡುಬರುತ್ತದೆ. 'ಸಮನ್ವಯ ಶಿಕ್ಷಣ ಮತ್ತು ವಿದ್ಯಾರ್ಥಿ ಬೆಂಬಲ' ಎಂಬ ಭಾಗದಲ್ಲಿ 'ಬುಡಕಟ್ಟು ಮಕ್ಕಳ ಶಿಕ್ಷಣದ ಮಟ್ಟವು ಬಹಳ ಕಳವಳಕಾರಿ ವಿಷಯವಾಗಿದೆ .... ಬುಡಕಟ್ಟು ಪ್ರದೇಶಗಳಲ್ಲಿ ಕೆಲಸ ಮಾಡುವ ಬುಡಕಟ್ಟೇನವರಾಗಿರದ ಶಿಕ್ಷಕರಿಗೆ ಭಾಷೆ ಮತ್ತು ಸಂಪರ್ಕವು ಒಂದು ಸಮಸ್ಯೆಯಾಗಿದೆ' (ಡಿಎನ್ಇಪಿ 2016, ಪು 23) ಎಂದು ಗುರುತಿಸಲಾಗಿದೆ. ಆ ಭಾಗದಲ್ಲಿನ ನೀತಿಯು ಹೀಗೆ ಹೇಳುತ್ತದೆ:

'ಸಾಮಾನ್ಯವಾಗಿ ಕಲಿಕಾ ಮಾಧ್ಯಮವಾಗಿರುವ ಪ್ರಾದೇಶಿಕ ಭಾಷೆಯಲ್ಲಿ ಅರ್ಥಮಾಡಿಕೊಳ್ಳುವುದು ಮತ್ತು ಕಲಿಯುವುದು ಬುಡಕಟ್ಟು ಮಕ್ಕಳಿಗೆ ಕಷ್ಟವೆಂಬುದನ್ನು ಅನುಭವವು ತೋರಿಸಿದೆ. ಈ ಅಡಚಣೆಯನ್ನು ನಿವಾರಿಸಲು, ಅಗತ್ಯವಿರುವ ಕಡೆಯಲ್ಲಿ ಬಹುಭಾಷಾ ಶಿಕ್ಷಣದ ಅನುಷ್ಠಾನವನ್ನುದೃಢಪಡಿಸಲು ಕ್ರಮವನ್ನು ಕೈಗೊಳ್ಳಲಾಗುವುದು.' (ಡಿಎನ್ಇಪಿ 2016, ಪು. 24)

ಪ್ರಾದೇಶಿಕ ಭಾಷೆಯನ್ನು 'ಅಡಚಣೆ' (ಅದರೊಂದಿಗೆ ಸ್ಥಳೀಯ/ಭೌತಿಕ ಲೋಪ) ಎಂದು ಭಾವಿಸಲಾಗುತ್ತದೆಂಬುದನ್ನು ಮಕ್ಕಳು ತಿಳಿದಿಲ್ಲ. 'ಬಹುಭಾಷಾ ಶಿಕ್ಷಣ'ದ ಮೂಲಕ ಈ 'ಅಡಚಣೆಯನ್ನು' ವ್ಯವಸ್ಥೆಯು ನಿವಾರಿಸುತ್ತದೆ. ಈ 'ಬಹುಭಾಷಾ ಶಿಕ್ಷಣ' ಏನೆಂಬುದನ್ನು ಅರ್ಥಮಾಡಿಕೊಳ್ಳಲು, ನಾವು ಮತ್ತೆ ಸಿಇಎನ್ಇಪಿಯನ್ನು ಓದಬೇಕಾಗುತ್ತದೆ. 'ಬುಡಕಟ್ಟು ಮಕ್ಕಳ ಶಿಕ್ಷಣ' ಕುರಿತ ವಿಭಾಗದಲ್ಲಿ ಸಿಇಎನ್ಇಪಿ ಹೀಗೆ ಹೇಳುತ್ತದೆ: 6.12.16 ಶಿಕ್ಷಣದ ಮಾಧ್ಯಮವಾದ ಪ್ರಾದೇಶಿಕ ಭಾಷೆಯನ್ನು ಬುಡಕಟ್ಟು ಜನಾಂಗದವರಿಗೆ ಅರ್ಥಮಾಡಿಕೊಳ್ಳಲು ಕಷ್ಟವೆಂದು ಒಂದು ಚರ್ಚೆಯಲ್ಲಿ ಸಮಿತಿಗೆ ಹೇಳಲಾಯಿತು. ಆದರೆ, ಸಾಮಾನ್ಯ ಭಾವನೆಯೆಂದರೆ ಆರಂಭಿಕ ಹಂತಗಳಲ್ಲಿ ಕಲಿಕಾ ಮಾಧ್ಯಮವು ಪ್ರಾದೇಶಿಕ ಭಾಷೆಯೇ ಆಗಿರಬೇಕು, ಇದನ್ನು ಸ್ಥಳೀಯ ಉಪಭಾಷೆಯಲ್ಲಿ ಹೇಳಿಕೊಡಬೇಕು [ಅದು ಅಲ್ಲಿನ ಸ್ಥಳೀಯ ಉಪಭಾಷೆಯೇ ಅಥವಾ ಒಂದು ಸ್ಥಳೀಯ ಉಪಭಾಷೆಯೇ – ನಮಗೆ ಸ್ಪಷ್ಟಪಡಿಸಿಲ್ಲ]. ಈಗಾಗಲೇ ದೊಡ್ಡ ಪ್ರಮಾಣದಲ್ಲಿ ಬುಡಕಟ್ಟು ಜನಸಂಖ್ಯೆಯನ್ನು ಹೊಂದಿರುವ ರಾಜ್ಯಗಳಲ್ಲಿ ಶಿಕ್ಷಕರು ಆ ಪ್ರದೇಶದ ಬುಡಕಟ್ಟು ಉಪಭಾಷೆಯಲ್ಲಿ ಕಲಿಸುವ ಹಲವಾರು ಕಾರ್ಯಕ್ರಮಗಳು ಜಾರಿಯಲ್ಲಿವೆ ಎಂದು ಸಮಿತಿಗೆ ತಿಳಿಸಲಾಯಿತು. ಇತರೆ ರಾಜ್ಯಗಳಲ್ಲಿ ದ್ವಿಭಾಷಾ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಲು ಪ್ರಯತ್ನಗಳಾಗುತ್ತಿವೆ. ಆರಂಭಿಕ ಹಂತಗಳಲ್ಲಿ ಶಿಕ್ಷಕರಿಗೆ ಸ್ಥಳೀಯ

ಉಪಭಾಷೆಗಳಲ್ಲಿ ತರಬೇತಿ ಬೇಕು. ಹಾಗೆಯೇ ಸ್ಥಳೀಯ ಭಾಷೆಗಳಲ್ಲಿ ಅಗತ್ಯ ಕಲಿಕಾ ವಸ್ತುಗಳು ಬೇಕು (ಪು. 95).

ಮೂಲನಿವಾಸಿ ಭಾಷೆಗಳನ್ನು 'ಉಪಭಾಷೆ' ಎಂದು ಹಗುರವಾಗಿ ಮತ್ತು ಅವಮಾನಕರ ಹೆಸರುಪಟ್ಟಿಯನ್ನು ಗಮನಿಸಿದರೆ ಸಮಿತಿಯ ಪ್ರಕಾರ ಬುಡಕಟ್ಟು ಜನಾಂಗದವರು ಉಪಭಾಷೆಗಳನ್ನು ಹೊಂದಿದ್ದಾರೆಯೇ ಹೊರತು ಭಾಷೆಗಳಲ್ಲ ಎಂಬುದು ಭಾಸವಾಗುತ್ತದೆ.

**ಸಿಇಎನ್‌ಇಪಿ ಅವಲೋಕನಗಳು:**

6.13.13 ಒಂದು ಭಾಷಾ ನೀತಿಯನ್ನು ಅನುಷ್ಠಾನಗೊಳಿಸುವಾಗ ಮಗು ಪ್ರಾಥಮಿಕ ಶಾಲೆಗೆ ಪ್ರವೇಶಿಸುವ ಮೊದಲು, ಆರಂಭಿಕ ಹಂತಗಳಲ್ಲಿ ಕಲಿಕಾ ಮಾಧ್ಯಮವಾಗಿ ಮಾತೃಭಾಷೆಗೆ ಪ್ರಾಮುಖ್ಯತೆ ನೀಡಬೇಕು. ಇದು ಸುಸ್ಪಷ್ಟ, ಭಾಷೆ ಮತ್ತು ಅಂಕಗಣಿತಗಳ ಮೂಲ ಪರಿಕಲ್ಪನೆಗಳನ್ನು ಮಾತೃಭಾಷೆಯಲ್ಲಿ ಉತ್ತಮವಾಗಿ ಕಲಿಯಬಹುದೆಂಬುದನ್ನು ಅಧ್ಯಯನಗಳು ಪದೇಪದೇ ಸೂಚಿಸಿವೆ. ಸಹಜವಾಗಿ, ಒಂದು ಮಗು ತನ್ನ ಮನೆ ಮತ್ತು ಸಾಮಾಜಿಕ ಪರಿಸರದಿಂದ ಮಾತೃಭಾಷೆಯನ್ನು ಸ್ವಾಭಾವಿಕವಾಗಿ ಕಲಿಯುತ್ತದೆ. ಪೂರ್ವ ಪ್ರಾಥಮಿಕ ಹಂತದಲ್ಲಿ ಮತ್ತು ಅಂಗನವಾಡಿಗಳಲ್ಲಿ, ಈ ತಿಳಿವಳಿಕೆಯನ್ನು ಹೆಚ್ಚಿಸಲು ಮತ್ತು ಬುಡಕಟ್ಟು ಭಾಷೆಗಳನ್ನೂ ಸೇರಿದಂತೆ ಮಕ್ಕಳ ಮಾತೃಭಾಷೆಯನ್ನು ಆಧರಿಸಿ ಭವಿಷ್ಯದ ಎಲ್ಲಾ ಶಿಕ್ಷಣಕ್ಕೂ ಒಂದು ಉತ್ತಮ ಅಡಿಪಾಯವನ್ನು ಸ್ಥಾಪಿಸಲು ಒತ್ತು ನೀಡಬೇಕು.ಮಗುವಿನ ಮಾತೃಭಾಷೆಗೆ ಅಂಗನವಾಡಿಗಳಲ್ಲಿ ಮಾತ್ರ ಸ್ಥಾನವಿದೆಯೇ ಹೊರತು ಇದು ಒಮ್ಮೆ ಮಗು ಶಾಲೆಗೆ ಪ್ರವೇಶಿಸಿದಾಗ ಇರುವುದಿಲ್ಲ. ಈ ಮುಂದಿನವುಗಳನ್ನು ಸಿಇಎನ್‌ಇಪಿ ಶಿಫಾರಸು ಮಾಡುತ್ತದೆ:

9.23.6 ಕಲಿಕಾ ಮಾಧ್ಯಮವಾಗಿರುವ ಪ್ರಾದೇಶಿಕ ಭಾಷೆಯಲ್ಲಿ ಅರಿಯುವುದು ಬುಡಕಟ್ಟು ಮಕ್ಕಳಿಗೆ ಕಷ್ಟವೆಂಬುದು ಅನೇಕ ರಾಜ್ಯಗಳ ಅನುಭವ .

ಈ ಸಮಸ್ಯೆಯನ್ನು ನಿವಾರಿಸಲು, ಆರಂಭಿಕ ಹಂತಗಳಲ್ಲಿ ಪ್ರಾದೇಶಿಕ ಭಾಷೆಯು ಶಿಕ್ಷಣದ ಮಾಧ್ಯಮವಾಗಿರಬೇಕು ಮತ್ತು ತರಗತಿಯ ವ್ಯವಹಾರವು ಸ್ಥಳೀಯ ಉಪಭಾಷೆಗಳಲ್ಲಿ ನಡೆಯಬೇಕು (ಪು. 193).

ಒಟ್ಟಾರೆಯಾಗಿ, 2016ರ ರಾಷ್ಟ್ರೀಯ ಕರಡು ಶಿಕ್ಷಣ ನೀತಿ ಹೀಗಿದೆ:• ಮಾತೃಭಾಷೆಯ ಪ್ರಾಮುಖ್ಯತೆಯ ಬಗ್ಗೆ ಕೇವಲ ಬಾಯಿಮಾತಿನಲ್ಲಿ ಹೇಳುತ್ತಾ ಕಾರ್ಯರೂಪದಲ್ಲಿ ಐಪಿಎಲ್‌ಎಂ ಮಕ್ಕಳಿಗೆ ಮಾತೃಭಾಷೆಯ ಮಾಧ್ಯಮವನ್ನು ನಿರಾಕರಿಸುತ್ತಲೇ ಮುಂದುವರೆಯಲಾಗಿದೆ;

• ಇದರ ಪರಿಣಾಮವಾಗಿ ಭಾಷಾ ಸಂಯೋಜನೆಯ ನೀತಿಯನ್ನು ಸಕ್ರಿಯವಾಗಿ ಉತ್ತೇಜಿಸಲಾಗುತ್ತದೆ;

• ಇದರ ಫಲಿತಾಂಶವೆಂದರೆ ಐಪಿಎಲ್‌ಎಂ ಮಕ್ಕಳ ಗ್ರಹಿಕೆ ಮತ್ತು ಭಾವನಾತ್ಮಕ ಅರಿವು ಕಳಪೆಯಾಗಿರುತ್ತದೆ.

ಸಾಕ್ಷರತಾ ಶಿಕ್ಷಣ

ಆರಂಭಿಕ ಸಾಕ್ಷರತೆಯ ಕುರಿತ ವಿಚಾರದಲ್ಲಿ ಹೆಚ್ಚಿನದೇನೂ ಹೇಳುವಂತಹುದಿಲ್ಲ. ಏಕೆಂದರೆ ಇದರ ಬಗ್ಗೆ ದಸ್ತಾವೇಜು ಏನೂ ಹೇಳುವುದಿಲ್ಲ! ಶಿಕ್ಷಣದ ಕುರಿತಾದ ರಾಷ್ಟ್ರೀಯ ನೀತಿಯಲ್ಲಿ ಇದರ ಉಲ್ಲೇಖ ಇಲ್ಲದಿರುವುದು ಒಂದು ಗಂಭೀರ ವಿಷಯವೆಂದು ನಾವು ಒತ್ತಿ ಹೇಳಬಯಸುತ್ತೇವೆ. ದಸ್ತಾವೇಜಿನಲ್ಲಿ ಸಾಕ್ಷರತೆಯ ಬಗ್ಗೆ ಪ್ರಸ್ತಾಪವಿರುವೆಡೆ (ಇದು ಹಲವೆಡೆ ಪ್ರಸ್ತಾಪವಾಗಿದೆ), ಇದನ್ನು ವಯಸ್ಕರ ಸಾಕ್ಷರತೆ ಮತ್ತು ಜೀವಮಾನವಿಡೀ ಕಲಿಯುವ ಸಂಬಂಧದಲ್ಲಿ ಬಳಸಲಾಗುತ್ತದೆ, ಮತ್ತು ಇದನ್ನು ನಿರೂಪಿಸಲು 'ಮೂಲ ಸಾಕ್ಷರತೆ', 'ಕ್ರಿಯಾತ್ಮಕ ಸಾಕ್ಷರತೆ' ಮುಂತಾದ ಪದಗಳನ್ನು ಬಳಸಲಾಗಿದೆ.

ಎಲ್ಲರಿಗೂ ಶಿಕ್ಷಣ ಮತ್ತು ಶಿಕ್ಷಣದ ಹಕ್ಕು ನೀತಿಗಳ ಅಡಿಯಲ್ಲಿ ಹೆಚ್ಚಿನ ಸಂಖ್ಯೆಯ ಮೊದಲ ತಲೆಮಾರಿನ ಕಲಿಕಾರ್ಥಿಗಳು ಶಾಲೆಗಳಿಗೆ ಪ್ರವೇಶಿಸುತ್ತಿದ್ದು, ಅವರಲ್ಲಿ ಅನೇಕರು ಕಲಿಯಲು ವಿಫಲರಾಗಿರುವಾಗ ಈ ವೈಫಲ್ಯವು ಏಕೆ ಆಗುತ್ತಿದೆಯೆಂದು ನಾವು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ ಎಂಬ ವಿಚಾರವನ್ನು ಮುಂದಿಡಲು ನಾವು ಬಯಸುತ್ತೇವೆ. ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಹಂತಗಳಲ್ಲಿ ಕಲಿಕೆಯ ಗುಣಮಟ್ಟ ಕಳಪೆಯಾಗಿದ್ದು ಆರಂಭಿಕ ವರ್ಷಗಳ ಈ ಪರಿಣಾಮಗಳು ಪ್ರೌಢ ಶಾಲಾ ಶಿಕ್ಷಣದಲ್ಲಿ ಮುಂದುವರೆದು ಅಂತಿಮವಾಗಿ ಉನ್ನತ ಶಿಕ್ಷಣದವರೆಗೆ ತಲುಪುತ್ತದೆ. ಈ ವೈಫಲ್ಯವನ್ನು ಮುಖ್ಯವಾಗಿ ಶಿಕ್ಷಕರ ಗುಣಮಟ್ಟ, ಪ್ರೇರಣೆ, ಗೈರುಹಾಜರಿ, ಶಾಲೆಗಳ ಮಾನದಂಡಗಳಿಗೆ ಬದ್ಧವಾಗದಿರುವುದು, ಐಸಿಟಿ ಬಳಕೆಯಲ್ಲಿ ಪ್ರಗತಿ ನಿಧಾನವಾಗಿರುವುದು (ಪು. 8) ಮುಂತಾದ ವಿಷಯಗಳಿಗೆ ಅನ್ವಯಿಸುವುದನ್ನು ಬಿಟ್ಟರೆ ಈ ಅಂಶವನ್ನು ಹೆಚ್ಚಾಗಿ ವಿಶ್ಲೇಷಿಸದೆ ಕೈಬಿಡಲಾಗಿದೆ. ವಿಷಯಾಧಾರಿತ ಕಲಿಕೆ ಸೇರಿದಂತೆ ಓದು ಮತ್ತು ಬರಹವು ಶಾಲಾ ಕಲಿಕೆಯ ಪ್ರಮುಖ ವಿಷಯಗಳು. ಆರಂಭಿಕ ಹಂತಗಳಲ್ಲಿ (ಹಲವಾರು ದೊಡ್ಡ ಪ್ರಮಾಣದ ಅಧ್ಯಯನಗಳಲ್ಲಿ ದಾಖಲಿಸಲ್ಪಟ್ಟಂತೆ) ಪರಿಣಿತಿಯಿಂದ ಓದಲು ಮತ್ತು ಬರೆಯಲು ಕಲಿಯದ ಮಕ್ಕಳ ವೈಫಲ್ಯವು ಅವರ ಇತರ ಎಲ್ಲಾ ಶಾಲಾ ಆಧಾರಿತ ಕಲಿಕೆಗೆ ದುರ್ಬಲ ಅಡಿಪಾಯವನ್ನು ಹಾಕುತ್ತದೆ. ಇದು ಅವರನ್ನು ಇಡಿ ಜೀವನದಲ್ಲಿ ಅರೆ-ಸಾಕ್ಷರರನ್ನಾಗಿ ಮಾಡುತ್ತದೆ, ತಮ್ಮ ಸಂತೋಷಕ್ಕಾಗಿ ಅಥವಾ ಉದ್ಯೋಗಾವಕಾಶಗಳಂತಹ ಹೆಚ್ಚು ಪ್ರಾಯೋಗಿಕ ಉದ್ದೇಶಗಳಿಗಾಗಿ ಪರಿಣಿತಿಯಿಂದ ಅವರಿಗೆ ಓದಲು ಮತ್ತು ಬರೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ಶಾಲೆಗಳಲ್ಲಿ ಆರಂಭಿಕ ಓದು ಮತ್ತು ಬರಹಗಳ ಕಲಿಕೆಯ ಬಗ್ಗೆ ನಾವು ನಿರ್ದಿಷ್ಟ ನಿಲುವು ಮತ್ತು ನೀತಿಯನ್ನು ಹೊಂದಿರಬೇಕು. ಮಕ್ಕಳಿಗೆ ಕೇವಲ ಮೂರು ಭಾಷೆಗಳನ್ನು ಕಲಿಸಬೇಕು ಎಂಬ ಸರಳ ಹೇಳಿಕೆಯು, ನಮ್ಮ ಅಭಿಪ್ರಾಯದಲ್ಲಿ, ಆರಂಭಿಕ ಸಾಕ್ಷರತೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ತಿಳುವಳಿಕೆಯುಳ್ಳ ಅಭಿಪ್ರಾಯವನ್ನು ರೂಪಿಸುವಲ್ಲಿ ಅಸಮರ್ಪಕವಾಗುತ್ತದೆ. ಪಡೇ ಭಾರತ್ ಬಡೇ ಭಾರತ್ (ಓದಿದ ಭಾರತ ಮುನ್ನಡೆದ ಭಾರತ) (MHRD, 2014) ಎಂಬ ಮಾನವ ಸಂಪನ್ಮೂಲ ಸಚಿವಾಲಯದ ದಸ್ತಾವೇಜಿನಲ್ಲೇ ಆರಂಭಿಕ ದರ್ಜೆಯಲ್ಲಿ ಓದು ಮತ್ತು ಬರಹಗಳು ಶಾಲಾ ಕಲಿಕೆಗೆ ತಳಹದಿಯಾಗಿದ್ದು, ಇವು ಒಟ್ಟಾರೆ ಕಲಿಕೆಯ ಗುಣಮಟ್ಟ ಮತ್ತು ಫಲಿತಾಂಶಗಳಿಗೆ ಬಹಳ ಮುಖ್ಯವಾದ ಕೊಡುಗೆ ನೀಡುತ್ತವೆ ಎಂದು ಗುರುತಿಸಲಾಗಿದೆ. ಈ ದಸ್ತಾವೇಜು ನಮ್ಮ ದೇಶವು ಅಳವಡಿಸಿಕೊಳ್ಳಬೇಕು ಎಂದು ಭಾವಿಸುವ ಕೆಲವು ಶಿಫಾರಸುಗಳನ್ನು (ವ್ಯವಸ್ಥೆ ಮಟ್ಟ ಮತ್ತು ಶಾಲಾ-ತರಗತಿ ಮಟ್ಟ) ವಿವರವಾಗಿ ನೀಡಿದೆ.

**ಆ ಕೆಲವು ಈ ಕೆಳಕಂಡಂತಿವೆ:**

- ಕಲಿಕಾ ಮಾಧ್ಯಮದ ಕುರಿತು ಸ್ಪಷ್ಟತೆ. ಇದು ಔಪಚಾರಿಕ ಶಾಲಾ ಕಲಿಕೆಯಲ್ಲಿ ಕನಿಷ್ಠ ಮೊದಲ 2-3 ವರ್ಷಗಳವರೆಗೆ ಮಕ್ಕಳ ಮನೆ ಭಾಷೆಯಲ್ಲಿ ಕಲಿಕೆಗೆ ಅವಕಾಶವನ್ನು ಒದಗಿಸಲು ಶಿಫಾರಸು ಮಾಡುತ್ತದೆ.

- ಕಡ್ಡಾಯವಾಗಿ ಪ್ರತಿದಿನ 2.5 ಗಂಟೆಗಳ ಕಾಲವನ್ನು (ವರ್ಷಕ್ಕೆ 500 ಗಂಟೆಗಳು) ಆರಂಭಿಕ ಓದು, ಬರಹ ಮತ್ತು ಭಾಷೆಗಾಗಿ ಮೀಸಲಿಡಬೇಕು

- ತಿಳಿವಳಿಕೆ(ಗ್ರಹಿಕೆ) ಯೊಂದಿಗೆ ಓದು ಮತ್ತು ಬರಹ ಕಲಿಸಲು ಒತ್ತು ನೀಡಬೇಕು

- ಮಕ್ಕಳ ಸಾಹಿತ್ಯವನ್ನೂ ಒಳಗೊಂಡಂತೆ ಸೂಕ್ತ ವಸ್ತುಗಳ ತಯಾರಿ ಮತ್ತು ಬಳಕೆಗೆ ಒತ್ತು ನೀಡಬೇಕು

- ಓದುವುದು ಮತ್ತು ಬರೆಯುವುದನ್ನು ಕಲಿಯುವ ಪ್ರಕ್ರಿಯೆಯನ್ನು ಅರಿಯುವುದು ಮತ್ತು ಪಠ್ಯಕ್ರಮ, ಮೌಲ್ಯಮಾಪನ, ಪ್ರತಿಕ್ರಿಯಶೀಲ ಮರುಬೋಧನೆ, ಸೂಕ್ತ ಪರಿಕರಗಳ ತಯಾರಿ ಇತ್ಯಾದಿಗಳ ಮೂಲಕ ಅತ್ಯುತ್ತಮ ಕಲಿಕೆಗೆ ಪೂರಕವಾಗುವ ಅಂಶಗಳಲ್ಲಿ ಶಿಕ್ಷಕರು, ಆಡಳಿತಗಾರರು ಮೊದಲಾದವರ ಸಾಮರ್ಥ್ಯ ಬೆಳವಣಿಗೆ ಮಾಡಬೇಕು.ಆರಂಭಿಕ ಬಾಲ್ಯ ಶಿಕ್ಷಣ ಹಾಗೂ ಅಭಿವೃದ್ಧಿ ಕೇಂದ್ರ (Centre for Early Childhood Education and Development – ಅಂಬೇಡ್ಕರ್ ವಿಶ್ವವಿದ್ಯಾಲಯ, ದೆಹಲಿ) ಮತ್ತು ಸಿಎಆರ್ಇ-ಇಂಡಿಯಾ (CARE-India), ಆರಂಭಿಕ ಭಾಷೆ ಮತ್ತು ಸಾಕ್ಷರತಾ ಶಿಕ್ಷಣದ (ಸಿಇಸಿಇಡಿ, 2016) ಕುರಿತು ಒಂದು ನಿಲುವುಪತ್ರಿಕೆಯನ್ನು ಬಿಡುಗಡೆ ಮಾಡಿದೆ. ಇದು ಎಲ್ಲಾ ಶಾಲೆಗಳಲ್ಲಿ ಆರಂಭಿಕ ಭಾಷೆ ಮತ್ತು ಸಾಕ್ಷರತೆ ವಹಿಸಿರುವ ಮೂಲ ಪಾತ್ರವನ್ನು ಪರಿಗಣಿಸುತ್ತದೆ. ಶಾಲೆಗಳಲ್ಲಿ ಭಾಷೆಗೆ ಸಂಬಂಧಿಸಿದಂತೆ ಮಕ್ಕಳ ಬಹಳಷ್ಟು ಸಮಸ್ಯೆಗಳು ಪಠ್ಯಾಂಶದ ಕುರಿತಾಗಿರುವುದರಿಂದ, ಭಾಷೆಗೆ ಸಂಬಂಧಿಸಿದಂತೆ ಇರುವ ಮೂಲ ನೀತಿಗಳ ಬಗ್ಗೆ ಗಮನಹರಿಸದ ಆರಂಭಿಕ ಸಾಕ್ಷರತೆಗೆ ಸಂಬಂಧಿಸಿದ ಸಮಸ್ಯೆಗಳಿಗೆ ವಿಶಿಷ್ಟ ಸ್ಥಾನ ದೊರಕಬೇಕೆಂದು ಸೂಚಿಸುತ್ತದೆ.

ಆರಂಭಿಕ ಭಾಷೆ ಮತ್ತು ಸಾಕ್ಷರತಾ ಶಿಕ್ಷಣದ (ELLI) ನಿಲುವುಪತ್ರಿಕೆಯು ಆರಂಭಿಕ ಸಾಕ್ಷರತಾ ಶಿಕ್ಷಣದ ಕುರಿತಂತೆ ನೀತಿ ಶಿಫಾರಸುಗಳಾಗಿ ಸುಲಭವಾಗಿ ಪರಿವರ್ತಿಸಬಹುದಾದ ಹಲವು ಶಿಫಾರಸುಗಳನ್ನು ನೀಡುತ್ತದೆ. ಇವುಗಳಲ್ಲಿ ಹಲವಾರು 'ಪಡೆ ಭಾರತ್ ಬಡೆ ಭಾರತ್' ದಸ್ತಾವೇಜಿನ ಶಿಫಾರಸುಗಳ ಪುನರಾವರ್ತನೆಯಾಗಿವೆ. ಇದರೊಂದಿಗೆ ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಕಲಿಕೆಯ 3-8ರ ವಯೋಮಾನವನ್ನು ನಿರಂತರ ಕಲಿಕಾ ಅವಧಿಯಂತೆ ಒಟ್ಟಾಗಿ ಯೋಜಿಸಿ ಕಾಣಬೇಕೆಂದು ಇದು ಸೂಚಿಸುತ್ತದೆ. ಇದು ಓದು ಮತ್ತು ಬರಹಕ್ಕೆ ಬೆಂಬಲವಾಗಿ ಆರಂಭಿಕ ಹಂತದ ತರಗತಿಗಳಲ್ಲಿ ಅಳವಡಿಸಿಕೊಳ್ಳಬೇಕಾದ ವಿವಿಧ ತತ್ವಗಳನ್ನೂ ವಿವರಿಸುತ್ತದೆ. ಡಿಎನ್ಇಪಿ ಕರಡುಪ್ರತಿಯನ್ನು ತಯಾರಿಸುವಾಗ ಈಗಿರುವ ಈ ಯಾವುದೇ ದಾಖಲೆಗಳನ್ನು ಪರಿಗಣಿಸಿಲ್ಲ. ಇದು ಒಂದು ಗಮನಾರ್ಹವಾದ ಲೋಪ. ಶಿಕ್ಷಣದ ಕುರಿತಾದ ಒಂದು ರಾಷ್ಟ್ರೀಯ ನೀತಿಯಲ್ಲಿ ಆರಂಭಿಕ ಸಾಕ್ಷರತೆಯ ಬಗ್ಗೆ ಒಂದು ಸ್ಪಷ್ಟ ಉಲ್ಲೇಖವಿರಬೇಕು. ಇದನ್ನು ವಿಳಂಬವಿಲ್ಲದೆ ಮಾಡಬೇಕು.

ಪರಾಮರ್ಶನ

1. CECED (Centre for Early Childhood Education and Development). (2016). *Early Language and Literacy in India: A Position Paper.* Delhi: Ambedkar University.
2. MHRD (Ministry of Human Resource Development). (2014). *Padhe Bharat Badhe Bharat: Early Reading and Writing with Comprehension & Early Mathematics Programme.* Retrieved from http://ssa.nic.in/pabminutes-documents/Padhe%20Bharat%20 Badhe%20Bharat.pdf
3. MHRD (Ministry of Human Resource Development). (2016a). National Policy on Education 2016: Report of the Committee for Evolution of the New Education Policy. New Delhi: Ministry of Human Resource Development. Retrieved from http://www. nuepa.org/New/download/NEP2016/ReportNEP.pdf

4. MHRD (Ministry of Human Resource Development). (2016b). *Some Inputs for Draft National Education Policy 2016.* New Delhi: Ministry of Human Resource Development. Retrieved from http:// mhrd.gov.in/sites/upload_files/mhrd/files/nep/Inputs_Draft_ NEP_2016.pdf

ಗಿರಿಧರ್ ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಭಾಷಾ ನೀತಿ, ಭಾಷಾ ಬೋಧನಶಾಸ್ತ್ರ, ಭಾಷಿಕ ಮಾನವ ಹಕ್ಕುಗಳು, ಅಂತಾರಾಷ್ಟ್ರೀಯ ಸಂವಹನ ಮಾಧ್ಯಮವಾದ ಎಸ್ಪೆರಾಂಟೋ (Esperanto), ಭಾಷಿಕ ಪ್ರಜಾಪ್ರಭುತ್ವ ಮತ್ತು ವಿಜ್ಞಾನ ಕಥನಗಳನ್ನು ಬೋಧಿಸುತ್ತಿದ್ದಾರೆ. ಅವರು ಇವೆಲ್ಲಾ ಜ್ಞಾನಶಿಸ್ತುಗಳ ಬಗ್ಗೆ bolii.blogspot.com. ಜಾಲತಾಣದಲ್ಲಿ ಲೇಖನಗಳನ್ನು ಬರೆಯುತ್ತಾರೆ. ಗಿರಿಧರ್ ಅವರನ್ನು rao.giridhar@apu.edu.in ಮೂಲಕ ಸಂಪರ್ಕಿಸಬಹುದು.

ಶೈಲಜಾ ಮೆನನ್ ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗದಲ್ಲಿ (School of Education) ಬೋಧಿಸುತ್ತಿದ್ದಾರೆ. ಜೊತೆಗೆ ಅವರು ತೆಲಂಗಾಣದ ಹೈದ್ರಾಬಾದ್‌ನಲ್ಲಿರುವ ಟಾಟಾ ಇನ್ಸ್‌ಟಿಟ್ಯೂಟ್ ಆಫ್ ಸೋಶಿಯಲ್ ಸೈನ್ಸ್‌ನ ಆರಂಭಿಕ ಬಾಲ್ಯ ಉಪಕ್ರಮ ತಂಡವನ್ನು ಮುನ್ನಡೆಸುತ್ತಿದ್ದಾರೆ. ಅದಕ್ಕೂ ಮುನ್ನ ಅವರು ಕೊಲರೆಡೋದ ಬೌಲ್ಡರ್‌ನಲ್ಲಿರುವ ಯುನಿವರ್ಸಿಟಿ ಆಫ್ ಕೊಲರೆಡೋದ ಶಿಕ್ಷಣ ವಿಭಾಗದಲ್ಲಿ (School of Education) ಕಾರ್ಯನಿರ್ವಹಿಸಿದ್ದರು. ಪ್ರಸ್ತುತ ಅವರು 'ಭಾರತೀಯ ಭಾಷೆಗಳಲ್ಲಿ ಸಾಕ್ಷರತಾ ಸಂಶೋಧನೆ' (Literacy Research in Indian Languages' -LiRIL) ಎಂಬ ಸುದೀರ್ಘ ಕಾರ್ಯಯೋಜನೆಯನ್ನು ಮುನ್ನಡೆಸುತ್ತಿದ್ದಾರೆ. ಕಥಾವನ ಎಂಬ ದುಭಾಷಿ ಮಕ್ಕಳ ವಾರ್ಷಿಕ ಸಾಹಿತ್ಯೋತ್ಸವದಲ್ಲಿ ಶೈಲಜಾ ಅವರು ಪ್ರಧಾನ ಉಪನ್ಯಾಸಕರಾಗಿದ್ದಾರೆ. ಭಾರತದ ಆರಂಭಿಕ ಸಾಕ್ಷರತೆಗೆ ಸಂಬಂಧಿಸಿದ ನೀತಿ ಮತ್ತು ಕಾರ್ಯಕ್ರಮಗಳನ್ನು ರೂಪಿಸುವ ಹಲವಾರು ಸಲಹಾ ಸಮಿತಿಗಳಲ್ಲೂ ಅವರು ಸದಸ್ಯೆಯಾಗಿ ಕಾರ್ಯನಿರ್ವಹಿಸಿದ್ದಾರೆ. ಅಂತಾರಾಷ್ಟ್ರೀಯ ಪತ್ರಿಕೆಗಳಲ್ಲಿ ಶೈಲಜಾ ಅವರು ಲೇಖನಗಳು ಪ್ರಕಟಗೊಂಡಿವೆ. ಅವರನ್ನು shailaja.menon@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: ಹೇಮಾದೇವಿ ಬಿ.ಎನ್

ಪರಿಶೀಲನೆ: ಚಂದ್ರಶೇಖರ್ ಮಂಡೆಕೋಲು